KA / BG - GPO/ 2515 /WPP-47/ 2009 – 2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಜೂನ್ ೩, ೨೦೧೧ (ಜ್ಯೇಷ್ಠ ೧೩, ಶಕ ವರ್ಷ ೧೯೩೩) | ನಂ. ೫೪೩ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/27/Bill/2011, Bangalore, Dated: 3rd June, 2011**

The following Bill was introduced in Legislative Assembly on 3.6.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹತ್ತನೇ ಅಧಿವೇಶನ**

## ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 27)**

ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 12) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 95 ಪ್ರಕರಣದ ತಿದ್ದುಪಡಿ.–** ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 12) 95ನೇ ಪ್ರಕರಣದ (2ಎ)ನೇ ಉಪ ಪ್ರಕರಣದಲ್ಲಿ "ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ" ಎಂಬ ಪದಗಳು, ಆವರಣ ಚಿಹ್ನೆ ಮತ್ತು ಅಂಕಿಗಳಿಗೆ "ಕರ್ನಾಟಕ ಭೂ ಕಂದಾಯ (ತಿದ್ದುಪಡಿ) ಅಧಿನಿಯಮ, 2011ರ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ" ಎಂಬ ಪದಗಳು, ಆವರಣ ಚಿಹ್ನೆ ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು ಮತ್ತು ಹಾಗೆ ಯಾವಾಗಲೂ ಪ್ರತಿಯೋಜಿಸಲಾಗಿದೆ ಎಂದು ಭಾವಿಸತಕ್ಕದ್ದು.

### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

2009ರ ಕರ್ನಾಟಕ ಅಧಿನಿಯಮ 26ರಲ್ಲಿ ತಿದ್ದುಪಡಿ ಮಾಡಿದಂತೆ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ 95ನೇ ಪ್ರಕರಣದ ಉದ್ದೇಶಕ್ಕಾಗಿ ಅರ್ಜಿಗಳನ್ನು ಸಲ್ಲಿಸುವುದಕ್ಕಾಗಿನ ಒಂದು ವರ್ಷದ ಅವಧಿಯು ಮುಕ್ತಾಯವಾಗಿದೆ. ಸದರಿ ಒಂದು ವರ್ಷದ ಅವಧಿಯನ್ನು ಪ್ರಸ್ತಾವಿತ ತಿದ್ದುಪಡಿಯಿಂದ ಈಗ ವಿಸ್ತರಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಜಿ. ಕರುಣಾಕರ ರೆಡ್ಡಿ**
ಕಂದಾಯ ಸಚಿವರು

**ಎಸ್.ಬಿ.ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 12) ಉದ್ಧೃತಭಾಗ**

XX XX XX

**95. ಬೇಸಾಯ ಭೂಮಿಯ ಉಪಯೋಗ ಮತ್ತು ಬೇಸಾಯ ಭೂಮಿಯನ್ನು ಇತರ ಉದ್ದೇಶಗಳಿಗಾಗಿ ಬಳಸುವುದಕ್ಕೆ ಕಾರ್ಯವಿಧಾನ.–**

XX XX XX

(2ಎ) ಬೇಸಾಯದ ಬಳಕೆಗಾಗಿ ತೆರಿಗೆ ನಿರ್ಧರಿಸಲಾದ ಅಥವಾ ಹಿಡುವಳಿ ಹೊಂದಿರುವ ಭೂಮಿಯ ಯಾವುದೇ ಅಧಿಭೋಗದಾರನು ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕಕ್ಕೆ ಮೊದಲು (2)ನೇ ಉಪ–ಪ್ರಕರಣದ ಅಡಿಯಲ್ಲಿ ಜಿಲ್ಲಾಧಿಕಾರಿಯ ಅನುಮತಿಯನ್ನು ಪಡೆಯದೇ ಆ ಭೂಮಿಯನ್ನು ಅಥವಾ ಅದರ ಒಂದು ಭಾಗವನ್ನು ಯಾವುದೇ ನಿವಾಸ, ಕೈಗಾರಿಕೆ ಅಥವಾ ವಾಣಿಜ್ಯ ಅಥವಾ ಯಾವುದೇ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿರುವ ಸಂದರ್ಭದಲ್ಲಿ ಮತ್ತು ಅಂಥ ಬದಲಿ ಉಪಯೋಗವನ್ನು ಸಕ್ರಮಗೊಳಿಸಲು ಅಪೇಕ್ಷಿಸಿದಲ್ಲಿ ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ಅಧಿನಿಯಮ, 2009ರ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಅವಧಿಯೊಳಗೆ ನಿಯಮಿಸಬಹುದಾದಂಥ ನಮೂನೆಯಲ್ಲಿ, ಅಂಥ ಶುಲ್ಕ ಮತ್ತು ದಂಡದೊಡನೆ ಜಿಲ್ಲಾಧಿಕಾರಿಯವರಿಗೆ ಅರ್ಜಿಯನ್ನು ಸಲ್ಲಿಸತಕ್ಕದ್ದು. ಅಂಥ ಅರ್ಜಿಯನ್ನು ಸ್ವೀಕರಿಸಿದ ತರುವಾಯ, ಜಿಲ್ಲಾಧಿಕಾರಿಯು ಈ ಅಧಿನಿಯಮದಲ್ಲಿ ಏನೇ ಇದ್ದರೂ ಆದರೆ ಪ್ರಸ್ತುತ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಉಪಬಂಧಗಳಿಗೆ ಒಳಪಟ್ಟು ಮತ್ತು ನಿಯಮಿಸಲಾದಂಥ ಷರತ್ತುಗಳಿಗೊಳಪಟ್ಟು ಹಾಗೂ ಅಂಥ ರೀತಿಯಲ್ಲಿ ತಾನು ಅವಶ್ಯವೆಂದು ಅಗತ್ಯಪಡಿಸಲಾದಂಥ ಸಾಕ್ಷ್ಯಗಳನ್ನು ಮಂಡಿಸಿದ ತರುವಾಯ ಮತ್ತು ವಿಚಾರಣೆ ನಡೆಸಿದ ನಂತರ ಅಂಥ ಭೂಮಿಯು ಈ ಕೆಳಕಂಡಂತೆ ಇದ್ದ ಸಂದರ್ಭದಲ್ಲಿ ಹೊರತುಪಡಿಸಿ, ಎಂದರೆ ಆ ಭೂಮಿಯು,–

(i) ನೈಸರ್ಗಿಕ ನೀರುಗಾಲುವೆಗಳು, ಅಥವಾ ಕಣಿವೆ ಹಾದಿಗೆ ಅಡ್ಡಲಾಗಿ ಇದ್ದಾಗ,

(ii) ರಾಜ್ಯ ಸರ್ಕಾರಕ್ಕೆ ಅಥವಾ ರಾಜ್ಯ ಸರ್ಕಾರವು ಮಾಲೀಕತ್ವ ಅಥವಾ ನಿಯಂತ್ರಣ ಹೊಂದಿರುವ ಒಂದು ಪ್ರಾಧಿಕಾರಕ್ಕೆ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರಕ್ಕೆ ಸೇರಿದಾಗ,

(iii) ಪ್ರಸ್ತುತ ಇರುವ ಅಥವಾ ಉದ್ದೇಶಿತ ರಸ್ತೆಗಳು, ಒಳ ಅಥವಾ ಹೊರ ವರ್ತುಲ ರಸ್ತೆಗಳ, ರಾಷ್ಟ್ರೀಯ ಹೆದ್ದಾರಿಗಳು, ವರ್ತುಲ ರಸ್ತೆಗಳ ಮೇಲಿನ ಬೈಪಾಸುಗಳೂ ಸೇರಿದಂತೆ ರಸ್ತೆಗಳ ಅಗಲೀಕರಣಕ್ಕೆ ಪ್ರಸ್ತಾಪಿಸಲಾದ ಭೂಮಿ ಅಥವಾ ರೈಲ್ವೆ ಲೈನ್‌ಗಳು, ಟ್ರಾಮ್‌ವೇಗಳು, ಸಮೂಹ ತ್ವರಿತ ಸಾರಿಗೆ ವ್ಯವಸ್ಥೆ ಯೋಜನೆಗಳು, ಸಂಪರ್ಕಗಳು ಮತ್ತಿತರ ನಾಗರೀಕ ಸೌಲಭ್ಯಗಳು ಅಥವಾ ಸಾರ್ವಜನಿಕ ಸೌಲಭ್ಯಗಳಿಗೆ ಅಡ್ಡಲಾಗಿ ಬರುತ್ತಿದ್ದಾಗ,

(iv) ಅರಣ್ಯ ಭೂಮಿಯಾಗಿದ್ದಾಗ,

(v) ಬೇರೊಬ್ಬ ವ್ಯಕ್ತಿಗೆ ಸೇರಿದ್ದು, ಅರ್ಜಿದಾರನು ಅದರ ಮೇಲೆ ಯಾವುದೇ ಹಕ್ಕನ್ನು ಹೊಂದಿರದಿದ್ದಾಗ,

(vi) ಅದನ್ನು ಉದ್ಯಾನವನಗಳು, ಆಟದ ಮೈದಾನಗಳು, ಬಯಲು ಜಾಗವಾಗಿ ಅಥವಾ ಯಾವುದೇ ನಾಗರೀಕ ಸೌಲಭ್ಯಗಳನ್ನು ಒದಗಿಸುವುದಕ್ಕಾಗಿ ಮೀಸಲಿರಿಸಿದ್ದಾಗ,

(vii) ಅಥವಾ ಕಟ್ಟಡವು ನೆರೆಯವರ ಸ್ವತ್ತಿಗೆ, ಮಳೆನೀರಿನ ಚರಂಡಿಗಳು, ಕೆರೆ ಅಂಗಳಗಳು, ನದಿಯ ಪಾತ್ರಗಳು, ಅಥವಾ ನದಿತಳಗಳು ಹಾಗೂ ಕಾಲುವೆಗಳಿಗೆ ಒತ್ತಿಕೊಂಡಿದ್ದಾಗ ಅಥವಾ ಹೈಟೆನ್ಷನ್ ವಿದ್ಯುತ್ ಲೈನುಗಳ ಅಡಿಯಲ್ಲಿ ಬರುತ್ತಿದ್ದಾಗ,

(viii) ಪಾರಂಪರಿಕ ಸ್ಮಾರಕಗಳು, ವಿಮಾನ ನಿಲ್ದಾಣಗಳು ಅಥವಾ ರಕ್ಷಣಾ ನಿಯಮಗಳ ವಲಯ ವಿನಿಯಮಗಳಲ್ಲಿ ನಿರ್ದಿಷ್ಟಪಡಿಸಿದ ಎತ್ತರಗಳ ನಿರ್ಬಂಧಗಳಿಗೆ ವಿರುದ್ಧವಾಗಿ ಅದರ ಬಳಕೆ ಇದ್ದಾಗ,

(ix) ಹೈಟೆನ್ಷನ್ ಲೈನುಗಳಿಂದ ಎಷ್ಟು ದೂರ ಇರಬೇಕು ಎಂಬ ನಿರ್ಬಂಧಕ್ಕೆ ಅಥವಾ ಅಗ್ನಿ ಆಕಸ್ಮಿಕ ರಕ್ಷಣಾ ಕ್ರಮಗಳಿಗೆ ಅನುಗುಣವಾಗಿ ಇರದಿದ್ದಾಗ,

(x) ಭಾರತ ಸರ್ಕಾರದ ಪರಿಸರ ಮತ್ತು ಅರಣ್ಯ ಮಂತ್ರಾಲಯದ ಕರಾವಳಿ ವಲಯ ವಿನಿಯಮಗಳ ಪ್ರದೇಶದೊಳಗಡೆ ಇದ್ದಾಗ,

(xi) ಅಥವಾ ಅಭಿವೃದ್ಧಿಯು ಸರಿಹೊಂದದ ವಲಯದಲ್ಲಿ ಇದ್ದು ವಿಶೇಷ ಅಥವಾ ಅನಿಯಮಿತ ಕೈಗಾರಿಕೆಯಾಗಿದ್ದು, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯು "ಕೆಂಪು" ಪಟ್ಟಿಯಲ್ಲಿ ಪ್ರವರ್ಗಿಸಿದ ಕೈಗಾರಿಕೆಯಾಗಿದ್ದಾಗ ಸರಿ ಹೊಂದುವ ವಲಯದೊಳಗೆ ಇದ್ದರೂ ಸಹ ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿಯೊಂದಿಗೆ ಮಾತ್ರ ಅದನ್ನು ಸಕ್ರಮಗೊಳಿಸತಕ್ಕದ್ದು;

(xii) ಭೂಮಿಯ ಬಳಕೆಯ ವಿಧಾನವನ್ನು ಬದಲಾಯಿಸಿರುವ ಸಂಬಂಧದಲ್ಲಿ ಅಕ್ರಮ–ಸಕ್ರಮಗೊಳಿಸುವುದನ್ನು ಕರ್ನಾಟಕ ನಗರ, ಪಟ್ಟಣ ಯೋಜನೆಗಳ ಅಧಿನಿಯಮ 1961ರ 14ಎ ಪ್ರಕರಣದ ಅನುಸಾರವಾಗಿ ಸಕ್ರಮಗೊಳಿಸತಕ್ಕದ್ದು.

(xiii) ಅಥವಾ ಎರಡಕ್ಕಿಂತ ಹೆಚ್ಚು ಮಹಡಿಗಳನ್ನು ಹೊಂದಿರುವ ಯಾವುದೇ ಕಟ್ಟಡದ ಸಂಬಂಧದಲ್ಲಿ ಅಭಿವೃದ್ಧಿಯನ್ನು,–

(ಎ) ಅಂಥ ಕಟ್ಟಡ ಗಟ್ಟಿಯಾಗಿದೆ ಎಂಬ ಬಗ್ಗೆ ರಚನಾ ಅಭಿಯಂತರರು ನೀಡಿದ ಪ್ರಮಾಣ ಪತ್ರವನ್ನು ಮಂಡಿಸಿದ,

(ಬಿ) ಅಗ್ನಿಶಾಮಕ ಇಲಾಖೆಯಿಂದ ನಿರಾಪೇಕ್ಷಣ ಪ್ರಮಾಣ ಪತ್ರವನ್ನು ಮಂಡಿಸಿದ,

– ಹೊರತು ಸಕ್ರಮಗೊಳಿಸತಕ್ಕದ್ದಲ್ಲ.

(xiv) ಅಥವಾ ಅನುಮೋದಿತ ಮಾಸ್ಟರ್ ಪ್ಲಾನಿನ ಕೃಷಿ ವಲಯದಲ್ಲಿ ಅಥವಾ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಅಡಿಯಲ್ಲಿ ಹಸಿರು ಪ್ರದೇಶ ಎಂದು ಘೋಷಿಸಿದ ಪ್ರದೇಶದಲ್ಲಿ ಅಕ್ರಮವಾಗಿ ಮಾಡಿದ ಅಭಿವೃದ್ಧಿ ಅಥವಾ ರಚನೆಯಾಗಿದ್ದಾಗ, ಹಾಗೂ

(xv) ನಿಯಮಿಸಲಾದ ಯಾವುದೇ ಇತರ ನಿಷೇಧಗಳಲ್ಲಿ ಅದು ಒಳಗೊಂಡಿದ್ದಾಗ,

– ಹೊರತುಪಡಿಸಿ ಅದನ್ನು ಸಕ್ರಮಗೊಳಿಸಬಹುದು ಅಥವಾ ಸಕ್ರಮಗೊಳಿಸಲು ನಿರಾಕರಿಸಬಹುದು:

XX XX XX

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### TENTH SESSION

### THE KARNATAKA LAND REVENUE (AMENDMENT) BILL, 2011

**(L.A. Bill No. 27 of 2011)**

A Bill further to amend the Karnataka Land Revenue Act, 1964.

Whereas, it is expedient further to amend the Karnataka Land Revenue Act, 1964 (Karnataka Act 12 of 1964), for the purposes hereinafter appearing;

Be it enacted by the Karnataka State Legislature in the Sixty Second year of the Republic of India, as follows:-

**1. Short title and commencement**.- (1) This Act may be called the Karnataka Land Revenue (Amendment) Act, 2011.

(2) It shall come into force at once.

**2. Amendment of section 95.-** In section 95 of the Karnataka Land Revenue Act, 1964 (Karnataka Act 12 of 1964), in sub-section (2A) for the words, brackets and figures "within the period of one year from the date of commencement of the Karnataka Land Revenue (Amendment) Act, 2009" the words brackets and figures "within the period of one year from the date of commencement of the Karnataka Land Revenue (Amendment) Act, 2011" shall be and shall always be deemed to have been substituted.

### STATEMENT OF OBJECTS AND REASONS

The period of one year for submitting applications for the purpose of section 95 of the Karnataka Land Revenue Act, 1964 as amended in Karnataka Act 26 of 2009, has expired. The said period of one year is being, now extended by the proposed amendment.

Hence the Bill.

**FINANCIAL MEMORANDUM**

There is no extra expenditure involved in the proposed Legislative measure.

**G.KARUNAKARA REDDY**
Minister for Revenue

**S.B.PATIL**
Secretary
Karnataka Legislative Assembly

**ANNEXURE**

**Extract from the Karnataka Land Revenue Act, 1964 (Karnataka Act 12 of 1964)**

**xxx** **xxx** **xxx**

**95. Uses of agricultural land and the procedure for use of agricultural land for other purpose.—** xx xx xx

(2A) Where any occupant of land assessed or held for the purpose of agriculture has diverted such land or part thereof to residential purpose without obtaining the permission of Deputy Commissioner under sub-section (2), prior to 31st day of December 2008 and desirous to get such diversion be regularised, shall, apply within the period of one year from the date of commencement of the Karnataka Land Revenue (Second Amendment) Act, 2009 in such form, alongwith such fee and penalty, as may be prescribed, to the Deputy Commissioner. On receipt of such application, the Deputy Commissioner may, notwithstanding anything contained in this Act, but subject to the provisions of any other law for the time being in force and subject to such conditions and in such manner as may be prescribed, on production of such evidence as he may require it to be necessary and after an enquiry, regularise or refuse to regularize except where such land,-

(i) lies in the line of natural drains or course of valley;

(ii) belongs to the State Government or an authority owned or controlled by the State Government or any local Authority;

(iii) coming in the way of existing or proposed roads, inner or outer ring roads, national high ways, by pass over ring roads including those proposed for widening and railway lines, tram ways, mass rapid transit system projects, communications and other civic facilities or public utilities;

(iv) is a forest land;

(v) belonging to another person over which the applicant has no title;

(vi) is reserved for parks, play grounds, open places or for providing any civic amenities;

(vii) or building is abutting to neighbouring property, storm water drains, tank bed areas, river course or beds and canals or below the high tension electric line;

(viii) use is against height restrictions specified in zoning regulations for heritage monuments, aerodrums and Defense Regulations;

(ix) not conforms to any clearance from high-tension lines or fire protection measures;

(x) is in the area covered by the Coastal Zone Regulations of the Ministry Environment and Forest, Government of India;

(xi) regularisation of violation in respect of change of land use shall be made as far as may be in accordance with section 14A of the Karnataka Town and Country Planning Act, 1961;

(xii) or development in respect of any building having more than two floors shall be regularised unless,-

  (a) a certificate from a Structural Engineer is produced regarding the structural stability of such building;

  (b) a No Objection Certificate is obtained from the Fire Force Department.

(xiii) or unauthorised development or construction made in agricultural zone of approved Master Plan or green belt area declared under Karnataka Land Revenue Act, 1964; and

(xiv) is covered under any other prohibition as may be prescribed:

xx xx xx xx

**S.B.PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಜೂನ್ ೩, ೨೦೧೧ (ಜ್ಯೇಷ್ಠ ೧೩, ಶಕ ವರ್ಷ ೧೯೩೩) | ನಂ. ೫೪೪ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/28/Bill/2011, Bangalore, Dated: 3rd June, 2011**

The following Bill was introduced in Legislative Assembly on 3.6.2011.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹತ್ತನೇ ಅಧಿವೇಶನ**

## ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ (ತಿದ್ದುಪಡಿ) ವಿಧೇಯಕ, 2011

**(2011ರ ವಿಧಾನ ಸಭೆಯ ವಿಧೇಯಕ ಸಂಖ್ಯೆ – 28)**

ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಅಧಿನಿಯಮ, 1994ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಅಧಿನಿಯಮ, 1994ನ್ನು (1994ರ ಕರ್ನಾಟಕ ಅಧಿನಿಯಮ 31) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ಅರವತ್ತೆರಡನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ (ತಿದ್ದುಪಡಿ) ಅಧಿನಿಯಮ, 2011 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಅಧಿನಿಯಮ, 1994ರ (1994ರ ಕರ್ನಾಟಕ ಅಧಿನಿಯಮ 31) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 3ನೇ ಪ್ರಕರಣದಲ್ಲಿ, (2)ನೇ ಉಪ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) ಆಯೋಗವು ಈ ಕೆಳಗಿನವರನ್ನು ಹೊಂದಿರತಕ್ಕದ್ದು,–

(ಎ) ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ವ್ಯಕ್ತಿಯು ಅಧ್ಯಕ್ಷರಾಗಿರತಕ್ಕದ್ದು ಹಾಗೂ ಮಾನ್ಯತೆ ಪಡೆದ ವಿಶ್ವವಿದ್ಯಾಲಯದಿಂದ ಪದವಿಯನ್ನು ಪಡೆದಿರುವ, ಅಲ್ಪಸಂಖ್ಯಾತ ಸಮುದಾಯದಿಂದ ಮತ್ತು ಕ್ರಿಶ್ಚಿಯನ್, ಜೈನ್, ಬೌದ್ಧ ಮತ್ತು ಸಿಖ್ ಈ ಪ್ರತಿಯೊಂದು ಸಮುದಾಯದಿಂದ ಒಬ್ಬರಿಗಿಂತ ಕಡಿಮೆ ಇಲ್ಲದಂತೆ ಇತರ ಎಂಟು ಸದಸ್ಯರನ್ನು ಹೊಂದಿರತಕ್ಕದ್ದು.

(ಬಿ) ಸರ್ಕಾರದ ಉಪ ಕಾರ್ಯದರ್ಶಿಯವರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯಾಗಿರುವ ಸರ್ಕಾರದಿಂದ ನೇಮಿಸಲ್ಪಟ್ಟ ಆಯೋಗದ ಕಾರ್ಯದರ್ಶಿಯನ್ನು ಹೊಂದಿರತಕ್ಕದ್ದು."

**3. 4ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 4ನೇ ಪ್ರಕರಣದಲ್ಲಿ,–

(ಎ) (3)ನೇ ಉಪ ಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) ಅಧ್ಯಕ್ಷರು ನಿಯಮಿಸಬಹುದಾದಂಥ ವೇತನ ಮತ್ತು ಭತ್ಯೆಗಳನ್ನು ಹಾಗೂ ಇತರ ಸದಸ್ಯರು ನಿಯಮಿಸಬಹುದಾದಂಥ ಭತ್ಯೆಗಳನ್ನು ಸ್ವೀಕರಿಸತಕ್ಕದ್ದು."

(ಬಿ) (4)ನೇ ಉಪ ಪ್ರಕರಣದಲ್ಲಿ, "ಅಧ್ಯಕ್ಷ ಮತ್ತು ಇತರ ಸದಸ್ಯರಿಗೆ ಸಂದಾಯ ಮಾಡಬೇಕಾದ ವೇತನ ಮತ್ತು ಭತ್ಯೆಗಳನ್ನು" ಎಂಬ ಪದಗಳಿಗೆ "ಅಧ್ಯಕ್ಷರಿಗೆ ಸಂದಾಯ ಮಾಡಬೇಕಾದ ವೇತನ ಮತ್ತು ಭತ್ಯೆಗಳನ್ನು ಹಾಗೂ ಇತರ ಸದಸ್ಯರಿಗೆ ಸಂದಾಯ ಮಾಡಬೇಕಾದ ಭತ್ಯೆಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 10ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 10ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ (ಬಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಬಿಬಿ) ಪ್ರಧಾನ ಮಂತ್ರಿಗಳ ಹೊಸ 15 ಅಂಶದ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಶಿಫಾರಸ್ಸುಗಳನ್ನು ಮಾಡುವುದು."

**5. 17ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 17ನೇ ಪ್ರಕರಣದ (2)ನೇ ಉಪ ಪ್ರಕರಣದಲ್ಲಿ (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) ಆಯೋಗದ ಅಧ್ಯಕ್ಷರಿಗೆ ಸಂದಾಯವಾಗಬೇಕಾದ ವೇತನ, ಭತ್ಯೆ ಮತ್ತು ಇತರ ಉಪಲಬ್ಧಿಗಳು, ಇತರ ಸದಸ್ಯರಿಗೆ ಸಂದಾಯವಾಗಬೇಕಾದ ಭತ್ಯೆಗಳು ಮತ್ತು ಇತರ ಸೇವಾ ಷರತ್ತುಗಳು"

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಅಧಿನಿಯಮ, 1994ನ್ನು ಈ ಮುಂದಿನ ಉಪಬಂಧಗಳನ್ನು ಕಲ್ಪಿಸುವುದಕ್ಕಾಗಿ ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ,–

(1) ಮಾನ್ಯತೆ ಪಡೆದ ವಿಶ್ವವಿದ್ಯಾಲಯದಿಂದ ಕನಿಷ್ಠ ಪದವಿಯನ್ನು ಪಡೆದಿರುವವರನ್ನು ಆಯೋಗದ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡುವುದು;

(2) ಇತರ ಎಂಟು ಸದಸ್ಯರ ಪೈಕಿ ಕ್ರಿಶ್ಚಿಯನ್, ಜೈನ್, ಬೌದ್ಧ ಮತ್ತು ಸಿಖ್ ಈ ಪ್ರತಿಯೊಂದು ಸಮುದಾಯದಿಂದ ಕನಿಷ್ಠ ಒಬ್ಬರಿಗೆ ಸದಸ್ಯತ್ವ ನೀಡುವುದು;

(3) ಸದಸ್ಯರಿಗೆ ಸಂಬಳ ಮತ್ತು ಭತ್ಯೆಗಳಿಗೆ ಬದಲಾಗಿ ಭತ್ಯೆಗಳನ್ನು ಸಂದಾಯ ಮಾಡುವುದು;

(4) ಆಯೋಗದ ಹೆಚ್ಚುವರಿ ಕರ್ತವ್ಯವಾಗಿ ಪ್ರಧಾನ ಮಂತ್ರಿಗಳ ಹೊಸ 15 ಅಂಶದ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಶಿಫಾರಸ್ಸುಗಳನ್ನು ಮಾಡುವುದು.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಆರ್ಥಿಕ ವೆಚ್ಚವನ್ನು ಒಳಗೊಳ್ಳುವುದಿಲ್ಲ.

**ಮುಮ್ತಾಜ್ ಅಲಿ ಖಾನ್**
ಹಜ್, ವಕ್ಫ್ ಮತ್ತು
ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

### ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಅಧಿನಿಯಮ, 1994ರ (1994ರ ಕರ್ನಾಟಕ ಅಧಿನಿಯಮ 31) ಉದ್ಧೃತ ಭಾಗಗಳು

XX XX XX

**3. ಆಯೋಗದ ರಚನೆ.–** (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ ಸರ್ಕಾರವು, ಈ ಅಧಿನಿಯಮದ ಅಡಿಯಲ್ಲಿ ತನಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಲು ಮತ್ತು ವಹಿಸಲಾದ ಪ್ರಕಾರ್ಯಗಳನ್ನು ನೆರವೇರಿಸಲು, ಬೆಂಗಳೂರಿನಲ್ಲಿ ಕೇಂದ್ರ ಕಾರ್ಯಸ್ಥಾನ ಹೊಂದಿರುವ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಎಂದು ಕರೆಯಲಾಗುವ ಒಂದು ನಿಕಾಯವನ್ನು ರಚಿಸತಕ್ಕದ್ದು.

(2) ಆಯೋಗವು,–

(ಎ) ದಕ್ಷತೆ, ಸಾಮರ್ಥ್ಯ ಮತ್ತು ಪ್ರಾಮಾಣಿಕತೆಯನ್ನು ಹೊಂದಿರುವ ವ್ಯಕ್ತಿಗಳ ಪೈಕಿಯಿಂದ ಸರ್ಕಾರವು ನಾಮನಿರ್ದೇಶಿಸುವ ಒಬ್ಬ ಅಧ್ಯಕ್ಷ ಮತ್ತು ಇತರ ಆರು ಮಂದಿ ಸದಸ್ಯರನ್ನು ಹೊಂದಿರತಕ್ಕದ್ದು:

ಪರಂತು, ಅಧ್ಯಕ್ಷನನ್ನು ಒಳಗೊಂಡಂತೆ ಐದು ಜನ ಸದಸ್ಯರು ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದವರಾಗಿರತಕ್ಕದ್ದು, ಮತ್ತು

(ಬಿ) ಸರ್ಕಾರದ ಜಂಟಿ ಕಾರ್ಯದರ್ಶಿಯವರ ದರ್ಜೆಗಿಂತ ಕಡಿಮೆಯಲ್ಲದ ದರ್ಜೆಯ ಅಧಿಕಾರಿಯಾಗಿರುವ ಸರ್ಕಾರದಿಂದ ನೇಮಿತನಾದ ಆಯೋಗದ ಕಾರ್ಯದರ್ಶಿಯನ್ನು ಹೊಂದಿರತಕ್ಕದ್ದು.

XX XX XX

**4. ಅಧ್ಯಕ್ಷ ಮತ್ತು ಸದಸ್ಯರ ಪದಾವಧಿ ಮತ್ತು ಸೇವಾ ಷರತ್ತುಗಳು.-**

XX XX XX

(3) ಅಧ್ಯಕ್ಷ ಮತ್ತು ಇತರ ಸದಸ್ಯರು ನಿಯಮಿಸಬಹುದಾದಂಥ ವೇತನ ಮತ್ತು ಭತ್ಯೆಗಳನ್ನು ಸ್ವೀಕರಿಸತಕ್ಕದ್ದು.

(4) ಅಧ್ಯಕ್ಷ ಮತ್ತು ಇತರ ಸದಸ್ಯರಿಗೆ ಸಂದಾಯ ಮಾಡಬೇಕಾದ ವೇತನ ಮತ್ತು ಭತ್ಯೆಗಳನ್ನು 12ನೇ ಪ್ರಕರಣದ (2)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ಅನುದಾನಗಳಿಂದ ಭರಿಸತಕ್ಕದ್ದು.

XX XX XX

**10. ಆಯೋಗದ ಪ್ರಕಾರ್ಯಗಳು.-** (1) ಆಯೋಗದ ಪ್ರಕಾರ್ಯಗಳು ಈ ಮುಂದಿನಂತಿರತಕ್ಕದ್ದು:-

(ಎ) ಸಂವಿಧಾನದಲ್ಲಿ ಮತ್ತು ಅಲ್ಪಸಂಖ್ಯಾತ ವರ್ಗಗಳ ಸಂರಕ್ಷಣೆಗಾಗಿ ರಾಜ್ಯವಿಧಾನ ಮಂಡಲವು ಅಂಗೀಕರಿಸಿದ ಕಾನೂನುಗಳಲ್ಲಿ ಕಲ್ಪಿಸಲಾಗಿರುವ ವಿವಿಧ ರಕ್ಷಣಾ ಕ್ರಮಗಳ ಬಗ್ಗೆ ಕಾರ್ಯನಿರ್ವಹಣೆಯನ್ನು ಪರಿಶೀಲಿಸುವುದು;

(ಬಿ) ಎಲ್ಲಾ ರಕ್ಷಣಾ ಕ್ರಮಗಳ ಪರಿಣಾಮಕಾರಿಯಾದ ಅನುಷ್ಠಾನ ಮತ್ತು ಜಾರಿಗೊಳಿಸುವಿಕೆಯನ್ನು ಖಚಿತಪಡಿಸಿಕೊಳ್ಳುವ ದೃಷ್ಟಿಯಿಂದ ಶಿಫಾರಸ್ಸು ಮಾಡುವುದು;

(ಸಿ) ಸಂವಿಧಾನದಲ್ಲಿ, ರಾಜ್ಯ ವಿಧಾನಮಂಡಲವು ಅಧಿನಿಯಮಿಸಿದ ಕಾನೂನುಗಳಲ್ಲಿ ಮತ್ತು ಅಲ್ಪಸಂಖ್ಯಾತ ವರ್ಗಗಳಿಗಾಗಿ ಸರ್ಕಾರದ ಕಾರ್ಯನೀತಿಗಳು ಮತ್ತು ಯೋಜನೆಗಳಲ್ಲಿ ಕಲ್ಪಿಸಲಾದ ರಕ್ಷಣಾ ಕ್ರಮಗಳ ಬಗೆಗಿನ ಕಾರ್ಯನಿರ್ವಹಣೆಯನ್ನು ಮೇಲ್ವಿಚಾರಣೆ ಮಾಡುವುದು;

(ಡಿ) ಅಲ್ಪಸಂಖ್ಯಾತ ವರ್ಗಗಳ ಬಗೆಗಿನ ತಾರತಮ್ಯವನ್ನು ತಪ್ಪಿಸುವ ಪ್ರಶ್ನೆಯ ಸಂಬಂಧದಲ್ಲಿ ಅಧ್ಯಯನ, ಸಂಶೋಧನೆ ಮತ್ತು ವಿಶ್ಲೇಷಣೆ ಮಾಡುವುದು;

(ಇ) ಸರ್ಕಾರದ ಉದ್ದಿಮೆಗಳ, ಸರ್ಕಾರದ ಮತ್ತು ಅರೆ ಸರ್ಕಾರಿ ನಿಕಾಯ ಮುಂತಾದವುಗಳ ಸೇವೆಯಲ್ಲಿ ಅಲ್ಪಸಂಖ್ಯಾತ ವರ್ಗಗಳ ಪ್ರಾತಿನಿಧ್ಯವನ್ನು ವಾಸ್ತವಿಕವಾಗಿ ನಿರ್ಧರಿಸುವುದು ಮತ್ತು ಪ್ರಾತಿನಿಧ್ಯವು ಸಾಕಷ್ಟಿಲ್ಲದಿದ್ದ ಸಂದರ್ಭದಲ್ಲಿ, ಅಪೇಕ್ಷಿತ ಮಟ್ಟವನ್ನು ಸಾಧಿಸುವುದಕ್ಕಾಗಿ ಮಾರ್ಗೋಪಾಯಗಳನ್ನು ಸೂಚಿಸುವುದು;

(ಎಫ್) ರಾಜ್ಯದಲ್ಲಿ ಕೋಮು ಸಾಮರಸ್ಯವನ್ನು ಖಚಿತಪಡಿಸಿಕೊಳ್ಳಲು, ನಿರ್ವಹಿಸಲು ಮತ್ತು ಉತ್ತೇಜಿಸಲು ಶಿಫಾರಸ್ಸುಗಳನ್ನು ಮಾಡುವುದು;

(ಜಿ) ಗೊತ್ತುಪಡಿಸಿದ ಅವಧಿಯಲ್ಲಿ ಸರ್ಕಾರಕ್ಕೆ ನಿಯತಕಾಲಿಕ ವರದಿಗಳನ್ನು ಸಲ್ಲಿಸುವುದು;

(ಹೆಚ್) ಅಲ್ಪಸಂಖ್ಯಾತ ವರ್ಗಗಳ ಕಲ್ಯಾಣ ಮತ್ತು ಅಭಿವೃದ್ಧಿಯ ದೃಷ್ಟಿಯಿಂದ ಮುಖ್ಯವಾದುದೆಂದು ಆಯೋಗವು ಅಭಿಪ್ರಾಯಪಡುವ ಯಾವುದೇ ಇತರ ವಿಷಯದ ಬಗ್ಗೆ ಅಧ್ಯಯನ ನಡೆಸುವುದು ಮತ್ತು ಸೂಕ್ತ ಶಿಫಾರಸ್ಸುಗಳನ್ನು ಮಾಡುವುದು;

(ಐ) ಅಲ್ಪಸಂಖ್ಯಾತ ವರ್ಗಗಳ ಕುಂದುಕೊರತೆಗಳನ್ನು ಪರಿಗಣಿಸುವುದು ಮತ್ತು ಕಾಲಕಾಲಕ್ಕೆ ಸೂಕ್ತ ಪರಿಹಾರವನ್ನು ಸೂಚಿಸುವುದು;

(ಜೆ) ಅಲ್ಪಸಂಖ್ಯಾತರ ಹಕ್ಕುಗಳ ಮತ್ತು ರಕ್ಷಣಾ ಕ್ರಮಗಳ ಬಗೆಗಿನ ವಂಚನೆಗೆ ಸಂಬಂಧಿಸಿದ ನಿರ್ದಿಷ್ಟ ದೂರುಗಳ ಬಗ್ಗೆ ಪರಿಶೀಲಿಸುವುದು ಮತ್ತು ಅಂಥ ವಿಷಯಗಳನ್ನು ಸೂಕ್ತ ಪ್ರಾಧಿಕಾರದ ಮುಂದೆ ತರುವುದು:

ಪರಂತು, (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ವಿಷಯವನ್ನು ಅಲ್ಪಸಂಖ್ಯಾತ ವರ್ಗಗಳಿಗಾಗಿ ರಾಷ್ಟ್ರೀಯ ಆಯೋಗ ಅಧಿನಿಯಮ, 1992ರ (1992ರ ಕೇಂದ್ರಾಧಿನಿಯಮ 19) 3ನೇ ಪ್ರಕರಣದ ಅಡಿಯಲ್ಲಿ ರಚಿತವಾದ ಅಲ್ಪಸಂಖ್ಯಾತ ವರ್ಗಗಳಿಗಾಗಿ ರಾಷ್ಟ್ರೀಯ ಆಯೋಗವು ವಹಿಸಿಕೊಂಡರೆ ರಾಜ್ಯ ಅಲ್ಪಸಂಖ್ಯಾತರ ಆಯೋಗವು ಅಂಥ ವಿಷಯಗಳ ಬಗ್ಗೆ ಅಧಿಕಾರ ವ್ಯಾಪ್ತಿ ಹೊಂದಿರುವುದು ನಿಂತು ಹೋಗತಕ್ಕದ್ದು.

XX XX XX

**17. ನಿಯಮ ರಚನಾಧಿಕಾರ.-** XX XX XX

(2) ವಿಶೇಷವಾಗಿ ಮತ್ತು ಪೂರ್ವೋಕ್ತ ಉಪಬಂಧಗಳ ಸಾಮಾನ್ಯತೆಗೆ ಪ್ರತಿಕೂಲವಾಗದಂತೆ ಅಂಥ ನಿಯಮಗಳು ಈ ಮುಂದಿನವುಗಳ ಬಗ್ಗೆ ಉಪಬಂಧ ಕಲ್ಪಿಸಬಹುದು:-

(ಎ) ಆಯೋಗದ ಅಧ್ಯಕ್ಷನ ಸ್ಥಾನಮಾನವನ್ನು ನಿರ್ಧರಿಸುವುದು;

(ಬಿ) ಆಯೋಗದ ಅಧ್ಯಕ್ಷ ಮತ್ತು ಸದಸ್ಯರಿಗೆ ಸಂದಾಯವಾಗಬೇಕಾದ ವೇತನ, ಭತ್ಯೆ ಮತ್ತು ಇತರ ಉಪಲಬ್ಧಿಗಳು ಮತ್ತು ಅವರ ಇತರ ಸೇವಾ ಷರತ್ತುಗಳು;

(ಸಿ) ಅಧಿನಿಯಮದ ಉಪಬಂಧಗಳಿಗನುಸಾರವಾಗಿ ಗೊತ್ತುಪಡಿಸಬೇಕಾದ ಅಥವಾ ಗೊತ್ತುಪಡಿಸಬಹುದಾದ ಯಾವುದೇ ಇತರ ವಿಷಯ ಮತ್ತು ಈ ಅಧಿನಿಯಮದ ಸೂಕ್ತ ಅನುಷ್ಠಾನಕ್ಕೆ ಅಗತ್ಯವೆಂದು ಸರ್ಕಾರವು ಅಭಿಪ್ರಾಯಪಡುವ ಉಪಬಂಧ.

XX XX XX

## KARNATAKA LEGISLATIVE ASSEMBLY

### THIRTEENTH LEGISLATIVE ASSEMBLY

### TENTH SESSION

# THE KARNATAKA STATE MINORITIES COMMISSION (AMENDMENT) BILL, 2011

### (L.A. Bill No. 28 of 2011)

A Bill further to amend the Karnataka State Minorities Commission Act, 1994.

Whereas it is expedient further to amend the Karnataka State Minorities Commission Act, 1994 (Karnataka Act 31 of 1994) for the purposes hereinafter appearing;

Be it enacted by the Karnataka State Legislature in the Sixty-Second year of the Republic of India, as follows:-

**1. Short title and commencement.-** (1) This Act may be called the Karnataka State Minorities Commission (Amendment) Act, 2011.

(2) It shall come into force at once.

**2. Amendment of section 3.-** In the Karnataka State Minorities Commission Act, 1994 (Karnataka Act 31 of 1994) (hereinafter referred to as the principal Act), in section 3, for sub-section (2), the following shall be substituted, namely:-

"(2) The Commission shall consist of,-

(a) the Chairman who shall be a person of a minority community and eight other members from the minority community holding a degree from a recognized university out of which not less than one each member shall be from Christian, Jain, Buddhist and Sikh community.

(b) the Secretary of the Commission, appointed by the Government being an officer not below the rank of Deputy Secretary to Government."

**3. Amendment of section 4.-** In section 4 of the principal Act,-

(a) for sub-section (3), the following shall be substituted, namely:-

"(3) The Chairman shall receive such salary and allowances and the other members shall receive such allowances as may be prescribed."

(b) in sub-section (4), for the words " other members" the words "allowances payable to other members" shall be substituted.

**4. Amendment of section 10.-** In section 10 of the principal Act, in sub-section (1), after clause (b), the following shall be inserted, namely:-

"(bb) to make recommendations for implementing the Prime Ministers new 15 Point Programme."

**5. Amendment of section 17.-** In section 17 of the principal Act, in sub-section (2), for clause (b), the following shall be substituted, namely:-

" (b) the salary, allowances and other emoluments payable to the Chairman, the allowances payable to other members of the Commission and other conditions of service."

### STATEMENT OF OBJECTS AND REASONS

It is considered necessary to amend the Karnataka State Minorities Commission Act, 1994 (Karnataka Act No. 31 of 1994) to provide for,-

(1) nomination of the members of the Commission who posses a minimum degree from a recognised University;

(2) membership of atleast one each from Christian, Jain, Buddhist and Sikh community out of the eight other members;

(3) payment of allowances to the members instead of salary and allowances;

(4) additional function to the Commission to make recommendation for implementing the Prime Ministers new 15 Point Programme.

Hence the Bill.

**FINANCIAL MEMORANDUM**

There is no extra financial expenditure involved in the proposed Legislative measure.

**MUMTAZ ALI KHAN**
Minister for Wakf and Haz
and Minorities Welfare

**S.B. PATIL**
Secretary
Karnataka Legislative Assembly

## ANNEXURE

**Extract from the Karnataka State Minorities Commission Act, 1994**
**(Karnataka Act 31 of 1994)**

XX XX XX

**3. Constitution of the Commission .-** (1) As soon as may be after the commencement of this Act, the Government shall constitute a body to be called as the Karnataka State Minorities Commission to exercise the powers conferred on and to perform the function assigned to it under this Act with its headquarters at Bangalore.

(2) The Commission shall consist of ,-

(a) a Chairman and six other members to be nominated by the Government, from amongst persons of eminence, ability and integrity:

Provided that five members including the Chairman shall be from amongst the minorities communities; and

(b) Secretary of the Commission, appointed by the Government being an officer not below the rank of a Joint Secretary to Government.

**4. Term of office and conditions of service of the Chairman and members .-** (1) Subject to the pleasure of the Government, the Chairman and members of the Commission shall hold office for a term of three years from the date they assume their offices.

(2) The Chairman or a member of the Commission may resign from his office in writing under his signature addressed to the Government, but shall continue in office until his resignation is accepted.

(3) The Chairman and other members shall receive such salary and allowance, as may be prescribed.

(4) The salary and allowances payable to the Chairman and other members shall be defrayed out of the grants referred to in sub-section (2) of section 12.

(5) A casual vacancy in the office of a member shall be filled up as soon as may be, by the authority concerned and a member so nominated shall hold office for the unexpired portion of the term of the office of his predecessor.

XX XX XX

**10. Functions of the Commission.-** (1) The functions of the Commission shall be as follows:-

(a) to examine the working of various safeguards provided in the Constitution and in the laws passed by the State Legislature for the protection of minorities;

(b) to make recommendations with a view to ensuring effective implementation and enforcement of all the safeguards;

XX XX XX

**17. Power to make rules .-** (1) The Government may, after previous publication by notification, in the official Gazette, make rules for the purposes of carrying out the provisions of this Act.

(2) In particular and without prejudice to the generality of the foregoing provisions, such rules may provide for,-

(a) to determine the status of Chairman of the Commission;

(b) the salary, allowance and other emoluments payable to the Chairman and members of the Commission and other conditions of their service;

XX XX XX

**S.B.PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಶುಕ್ರವಾರ, ಜೂನ್ ೩, ೨೦೧೧ (ಜ್ಯೇಷ್ಠ ೧೩, ಶಕ ವರ್ಷ ೧೯೩೩) | ನಂ. ೫೪೫ |
|---|---|---|


## ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಂಡಳಿ ಕಟ್ಟಡ (ಹಿಂಭಾಗ) 1ನೇ ಮಹಡಿ ನಂ.8, ಕನ್ನಿಂಗ್ ಹ್ಯಾಂ ರಸ್ತೆ. ಬೆಂಗಳೂರು–560052

**ಆದೇಶ**

**ಸಂಖ್ಯೆ: ರಾಚುಆ.21.ಇಯುಬಿ.2011, ಬೆಂಗಳೂರು ದಿನಾಂಕ: 03–06–2011**

ರಾಜ್ಯ ಚುನಾವಣಾ ಆಯೋಗವು ಈ ಕೆಳಗೆ ನಮೂದಿಸಿರುವ ಚುನಾವಣಾ ವೇಳಾಪಟ್ಟಿಯಂತೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ನಂ 180 (ಬನಶಂಕರಿ ದೇವಸ್ಥಾನದ ವಾರ್ಡ್) ಉಪಚುನಾವಣೆಯನ್ನು ನಡೆಸಲು ಆದೇಶಿಸಿದೆ.

**ಚುನಾವಣಾ ವೇಳಾ ಪಟ್ಟಿ**

| | | |
|---|---|---|
| 1 | ಆಯುಕ್ತರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರು ಚುನಾವಣಾ ಅಧಿಸೂಚನೆಯನ್ನು ಹೊರಡಿಸುವ ದಿನಾಂಕ ಮತ್ತು ದಿನ | 06–06–2011 ಸೋಮವಾರ |
| 2 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | 13–06–2011 ಸೋಮವಾರ |
| 3 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | 14–06–2011 ಮಂಗಳವಾರ |
| 4 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | 16–06–2011 ಗುರುವಾರ |
| 5 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸ ಬೇಕಾದ ದಿನಾಂಕ ಮತ್ತು ದಿನ | 26–06–2011 ಭಾನುವಾರ |
| 6 | ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 26–06–2011 ಭಾನುವಾರ |
| 7 | ಮರು ಮತದಾನ ಇದ್ದಲ್ಲಿ ಮತದಾನದ ಸಮಯ ಬೆಳಿಗ್ಗೆ 7.00 ಘಂಟೆಯಿಂದ ಸಾಯಂಕಾಲ 5.00 ಘಂಟೆವರೆಗೆ | 28–06–2011 ಮಂಗಳವಾರ |
| 8 | ಮತಗಳ ಎಣಿಕೆಯು ಬೆಳಿಗ್ಗೆ 8.00 ಘಂಟೆಯಿಂದ | 29–06–2011 ಬುಧವಾರ |
| 9 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | 30–06–2011 ಗುರುವಾರ |

ಆಯುಕ್ತರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರು ಆಯೋಗವು ಆದೇಶಿಸಿರುವ ಚುನಾವಣಾ ವೇಳಾ ಪಟ್ಟಿಯನ್ನು ಅನುಸರಿಸಿ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್(ಚುನಾವಣೆ) ನಿಯಮಗಳು 1979 ರ ನಿಯಮ 10 ರ ಪ್ರಕಾರ ಅಧಿಸೂಚನೆಯನ್ನು ಪ್ರಪತ್ರ 1ರಲ್ಲಿ ಹೊರಡಿಸತಕ್ಕದ್ದು. ಹಾಗೆ ಹೊರಡಿಸಲಾದ ಅಧಿಸೂಚನೆಯನ್ನು ಅದೇ ದಿನದಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಿಸತಕ್ಕದ್ದು. ಪ್ರಕಟಿತ ಅಧಿಸೂಚನೆಯ ಪ್ರತಿಗಳನ್ನು ಆಯುಕ್ತರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಜಿಲ್ಲಾಧಿಕಾರಿಗಳ ಕಛೇರಿ, ಸಂಬಂಧಪಟ್ಟ ನಗರ ಸ್ಥಳೀಯ ಸಂಸ್ಥೆಯ ಕಛೇರಿ ಹಾಗೂ ಇನ್ನಿತರ ಮುಖ್ಯ ಸ್ಥಳಗಳಲ್ಲಿಯೂ ಸಹಾ ಪ್ರದರ್ಶಿಸತಕ್ಕದ್ದು. ಅಧಿಸೂಚನೆಯ ಪ್ರತಿಯನ್ನು ಚುನಾವಣಾಧಿಕಾರಿಗಳಿಗೆ ಕಳುಹಿಸಿಕೊಟ್ಟು ಅದೇ ದಿನದಂದು ಪ್ರಪತ್ರ–1ಎ ರಲ್ಲಿ ಚುನಾವಣಾ ನೋಟೀಸನ್ನು ಪ್ರಕಟಿಸುವಂತೆ ಅವರಿಗೆ ಸೂಚನೆಗಳನ್ನು ನೀಡತಕ್ಕದ್ದು. ಚುನಾವಣೆ ನಡೆಯುವ ವಿಷಯವನ್ನು ಸಾರ್ವಜನಿಕರ ಮಾಹಿತಿಗಾಗಿ ದಿನಪತ್ರಿಕೆಗಳಲ್ಲಿ ಹಾಗೂ ಸ್ಥಳೀಯ ಪತ್ರಿಕೆಗಳಲ್ಲಿ (ವೆಚ್ಚ ಬಾರದಂತೆ) ಪ್ರಕಟಿಸಲು ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವುದು. ಚುನಾವಣಾಧಿಕಾರಿ/ ಸಹಾಯಕ ಚುನಾವಣಾಧಿಕಾರಿಗಳನ್ನು ನೇಮಿಸಿ ನೇಮಕಾತಿ ಆದೇಶವನ್ನು ಆಯೋಗಕ್ಕೆ ಕಳುಹಿಸುವುದು.

ಸದಾಚಾರ ಸಂಹಿತೆಯು ರಾಜ್ಯ ಚುನಾವಣಾ ಆಯೋಗವು ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸುವ ದಿನಾಂಕದಿಂದಲೇ ಅಂದರೆ ದಿನಾಂಕ: 03-06-2011 ರಿಂದ ಜಾರಿಗೆ ಬಂದಿದ್ದು, ಚುನಾವಣಾ ಪ್ರಕ್ರಿಯೆಯು ಮುಕ್ತಾಯಗೊಳ್ಳುವವರೆಗೆ ಅಂದರೆ ದಿನಾಂಕ: 30-06-2011 ವರೆಗೆ ಚುನಾವಣೆ ನಡೆಯುವ ವಾರ್ಡಿನ ವ್ಯಾಪ್ತಿಯಲ್ಲಿ ಮಾತ್ರ ಜಾರಿಯಲ್ಲಿರುತ್ತದೆ. ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರು ಸದಾಚಾರ ಸಂಹಿತೆಯು ಯಾವುದೇ ರೀತಿಯಲ್ಲೂ ಉಲ್ಲಂಘನೆಯಾಗದಂತೆ ನೋಡಿಕೊಳ್ಳತಕ್ಕದ್ದು.

ಆದೇಶಾನುಸಾರ
**ಸಿ.ಆರ್.ರೇವಣ್ಣ**
ಅಧೀನ ಕಾರ್ಯದರ್ಶಿ
ರಾಜ್ಯ ಚುನಾವಣಾ ಆಯೋಗ, ಕರ್ನಾಟಕ

ವಿಶೇಷ ಪತ್ರಿಕೆ

ಭಾಗ – **IV-A** | ಬೆಂಗಳೂರು, ಶನಿವಾರ, ಜೂನ್ ೪, ೨೦೧೧ (ಜ್ಯೇಷ್ಠ ೧೪, ಶಕ ವರ್ಷ ೧೯೩೩) | ನಂ. ೫೪೬

## HEALTH AND FAMILY WELFARE SECRETARIAT

### NOTIFICATION

### No. HFW 141 HSM 2009, Bangalore, Dated: 03-06-2011

The draft of the following rules further to amend the Karnataka Public Health Services (Recruitment) Rules, 1960, which the Government of Karnataka proposes to make in exercise of the powers conferred by sub-section (2) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section (3) of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Secretary to Government, Health and Family Welfare Department, Vikasa Soudha, Bangalore-560 001.

### DRAFT RULES

1. **Title and commencement:-** (1) These rules may be called the Karnataka Public Health Services (Recruitment) (Amendment) Rules, 2011.

(2) They shall come into force from the date of their publication in the Official Gazette.

**2. Amendment of Schedule I:-** In the Karnataka Public Health Services (Recruitment) Rules, 1960, in Schedule-I, for the entries relating to the category of posts of:-

"Health Equipment Officer (X-ray Engineer) at Serial No. 11, the following shall be substituted, namely:-

| 1 | 2 | 3 | 4 |
|---|---|---|---|
| 11. | Health Equipment Officer<br>(X-ray Engineer) | Fifty percent by promotion from the cadre of Junior Engineer (Electrical) :<br><br>Provided that if no eligible person is available from the cadre of Junior Engineer (Electrical) for promotion then by promotion from Junior Engineer (Mechanical) :<br><br>Provided further that where Junior Engineer (Mechanical) is promoted he must undergo the necessary training of appropriate duration to be arranged by the Department in this behalf and<br><br>Fifty percent by deputation from the cadre of Assistant Engineer (Electrical): | **For Promotion:-**<br><br>(i) Must Possess Diploma in Mechanical or Electrical Engineering from an institution recognized by Government of Karnataka;<br><br>(ii) Must have put in not less than ten years of service in the cadre of Junior Engineer (Electrical/Mechanical): |

"

By Order and in the Name of the Governor of Karnataka,

**I. HEMANATH**
Under Secretary to Government
Health and Family Welfare Department

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಜೂನ್ ೪, ೨೦೧೧ (ಜ್ಯೇಷ್ಠ ೧೪, ಶಕ ವರ್ಷ ೧೯೩೩) | ನಂ. ೫೪೨ |
|---|---|---|


## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 26 ಎಲ್ಎಂಡಬ್ಲ್ಯೂ 2011, ಬೆಂಗಳೂರು, ದಿನಾಂಕ: 03-06-2011.**

ಕರ್ನಾಟಕ ರಾಜ್ಯಾದ್ಯಂತ **"ಅನುಸೂಚಿತ ಪಟ್ಟಿಗೆ ಸೇರದೆ ಇರುವಂತಹ ಉದ್ಯಮದಲ್ಲಿ ತೊಡಗಿರುವ ಕಾರ್ಮಿಕರಿಗೆ [Unscheduled Employments]"** ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರಾಧಿನಿಯಮ ಸಂಖ್ಯೆ: XI) ಸೆಕ್ಷನ್ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948ರ ಸೆಕ್ಷನ್ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಅನುಸೂಚಿತ ಪಟ್ಟಿಗೆ ಸೇರದೆ ಇರುವಂತಹ ಉದ್ಯಮದಲ್ಲಿ ತೊಡಗಿರುವ ಕಾರ್ಮಿಕರಿಗೆ [Unscheduled Employments]"** ವೇತನವನ್ನು ಈ ಕೆಳಕಂಡಂತೆ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು ಪ್ರತಿ ತಿಂಗಳಿಗೆ [ರೂಪಾಯಿಗಳಲ್ಲಿ] |
|---|---|---|
| 1 | ಅತಿ ಕುಶಲರು | 4212-47 |
| 2 | ಕುಶಲರು | 4097-14 |
| 3 | ಅರೆ ಕುಶಲರು | 3464-97 |
| 4 | ಕುಶಲರಲ್ಲದವರು | 3292-47 |

**ತುಟ್ಟಿಭತ್ಯೆ:-**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960-100) 3944 ಅಂಶಗಳಿಗೆ ಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:-**

ಅ) ಮಾಸಿಕ ವೇತನವನ್ನು ಪಡೆಯುವವರು:-

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :-

ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ತುಟ್ಟಿಭತ್ಯೆ

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಅಪ್ರೆಂಟೀಸ್‌ಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ


| ಭಾಗ – IV-A | ಬೆಂಗಳೂರು, ಶನಿವಾರ, ಜೂನ್ ೪, ೨೦೧೧ (ಜ್ಯೇಷ್ಠ ೧೪, ಶಕ ವರ್ಷ ೧೯೩೩) | ನಂ. ೫೪೪ |
|---|---|---|


## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 5 ಎಲ್ಎಂಡಬ್ಲ್ಯೂ 2011, ಬೆಂಗಳೂರು, ದಿನಾಂಕ: 03-06-2011

ಕರ್ನಾಟಕ ರಾಜ್ಯಾದ್ಯಂತ **"ಟಾಡಿ ಟಾಪಿಂಗ್"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರಾಧಿನಿಯಮ ಸಂಖ್ಯೆ: XI) ಸೆಕ್ಷನ್ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948ರ ಸೆಕ್ಷನ್ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಟಾಡಿ ಟಾಪಿಂಗ್"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ವಿವಿಧ ಕಾರ್ಮಿಕ ವರ್ಗದವರಿಗೆ ವೇತನವನ್ನು ಈ ಕೆಳಕಂಡಂತೆ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ಪ್ರತಿ ತಿಂಗಳಿಗೆ | |
|---|---|---|---|
| 1 | 2 | 3 | 4 |
| | | ಕುಶಲ | ಅರೆಕುಶಲ |
| 1 | ಹೆಂಡ ಇಳಿಸುವವರು [ಸಹಾಯಕರ ಸಹಾಯವನ್ನು ಒದಗಿಸಿದ ಸಂದರ್ಭದಲ್ಲಿ 30 ಈಚಲು ಮರಗಳಿಂದ ಹೆಂಡ ಇಳಿಸುವುದಕ್ಕೆ] | **3770–08** | **3466–48** |
| 2 | ಹೆಂಡ ಇಳಿಸುವವರು [10 ಭಗಿನ ಸಾಗೋ ತಾಳೆ ಮರದ ಜಾತಿಯ ಮರದಿಂದ ಹೆಂಡ ಇಳಿಸುವುದು ಅಥವಾ ತಾಳೆ ಮರ ಅಥವಾ ತೆಂಗಿನ ಮರದಿಂದ ಹೆಂಡ ಇಳಿಸುವವರು] | **3805–73** | **3760–88** |
| 3 | ಸೆಲ್ಲರ್ಸ್ | **3437–73** | |
| 4 | ಬಾಟಲ್ ಫಿಲ್ಲರ್, ಕ್ಲೀನರ್, ಇತರೆ | **3377–93** | |
| 5 | ಸಪ್ಲೈರ್ಸ್ ಮತ್ತು ಡಿಪೋ ಕೆಲಸಗಾರರು | | |
| 6 | ಚೌಕಿದಾರರು | **3760–88** | |
| 7 | ಅಕೌಂಟೆಂಟ್ ಮತ್ತು ಕ್ಯಾಷಿಯರ್ ಕ್ಲರ್ಕ್ | **3794–23** | |
| 8 | ಹೆಲ್ಪರ್ಸ್ [ಜನರಲ್] | **3741–33** | |
| 9 | ಲಾರಿ ಡ್ರೈವರ್ಸ್ | **3367–58** | |
| 10 | ವೆಹಿಕಲ್ ಕ್ಲೀನರ್ಸ್ | | |
| 11 | ಜೀಪ್ ಡ್ರೈವರ್ಸ್ | | |
| 12 | ಕಾರ್ ಡ್ರೈವರ್ಸ್ ಮತ್ತು ಮಿಸಲೇನಿಯಸ್ ಟ್ರಾನ್ಸ್‌ಪೋರ್ಟ್ | | |
| 13 | ಇತರ ಕೆಲಸಗಾರರು | | |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30}}{26} = \text{ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೆ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ನೌಕರರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ದರವನ್ನು 26 ರಿಂದ ಭಾಗಿಸಬೇಕು, ಹಾಗೂ ಒಂದು ವೇಳೆ ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡಿದ ಸಂದರ್ಭಗಳಲ್ಲಿ ಅಂತಹ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗದಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಅಪ್ರೆಂಟೀಸ್‌ಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ



| ಭಾಗ – IV-A | ಬೆಂಗಳೂರು, ಶನಿವಾರ, ಜೂನ್ ೪, ೨೦೧೧ (ಜ್ಯೇಷ್ಠ ೧೪, ಶಕ ವರ್ಷ ೧೯೩೩) | ನಂ. ೫೪೯ |
|---|---|---|



## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 33 ಎಲ್‌ಎಂಡಬ್ಲ್ಯೂ 2011, ಬೆಂಗಳೂರು, ದಿನಾಂಕ: 03-06-2011

ಕರ್ನಾಟಕ ರಾಜ್ಯಾದ್ಯಂತ **"ಇಂಜಿನಿಯರಿಂಗ್"** ಉದ್ದಿಮೆಯಲ್ಲಿನ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರಾಧಿನಿಯಮ ಸಂಖ್ಯೆ: XI) ಸೆಕ್ಷನ್ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಅಧಿಸೂಚನೆಯನ್ನು ಪ್ರಕಟಿಸಲಾಗಿದೆ. ಈ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ. ಸಲಹೆ/ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅದನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29 ಇಲ್ಲಿಗೆ ಸಲ್ಲಿಸಬಹುದಾಗಿರುತ್ತದೆ.

ಕನಿಷ್ಠ ವೇತನ ಕಾಯ್ದೆ, 1948ರ ಸೆಕ್ಷನ್ 3(1)(ಬಿ) ಮತ್ತು 5(1)(ಬಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ, ಕರ್ನಾಟಕ ರಾಜ್ಯಾದ್ಯಾಂತ ಯಾವುದೇ **"ಇಂಜಿನಿಯರಿಂಗ್"** ಉದ್ದಿಮೆಯ ಯಾವುದೇ ಕೆಲಸದಲ್ಲಿ ತೊಡಗಿರುವ ವಿವಿಧ ಕಾರ್ಮಿಕ ವರ್ಗದವರಿಗೆ ವೇತನವನ್ನು ಈ ಕೆಳಕಂಡಂತೆ ಪರಿಷ್ಕರಿಸಲು ಪ್ರಸ್ತಾಪಿಸಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಕನಿಷ್ಠ ವೇತನ ದರಗಳು ಪ್ರತಿ ದಿನಕ್ಕೆ [ರೂಪಾಯಿಗಳಲ್ಲಿ] | |
|---|---|---|---|
| | | ವಲಯ-1 | ವಲಯ-2 |
| 1 | ಅತಿ ಕುಶಲರು | 185-00 | 182-70 |
| 2 | ಕುಶಲರು | 174-65 | 171-20 |
| 3 | ಅರೆ ಕುಶಲರು | 168-60 | 165-15 |
| 4 | ಕುಶಲರಲ್ಲದವರು | 164-30 | 163-15 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 3944 ಅಂಶಗಳಿಗೆ ಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 3944 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2010 ರಿಂದ ಡಿಸೆಂಬರ್ 2010)ರ ಸರಾಸರಿ ಆಧಾರದ ಮೇಲೆ 2011 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–**

ಅ) ಮಾಸಿಕ ವೇತನವನ್ನು ಪಡೆಯುವವರು:–

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

ಆ) ದಿನಗೂಲಿ ವೇತನ ಪಡೆಯುವವರು :–

ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ತುಟ್ಟಿಭತ್ಯೆ

26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ಹೆಚ್ಚಾಗಿರುವ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ರಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸಬೇಕು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಅಪ್ರೆಂಟೀಸ್‌ಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

ವಲಯ–1 : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು.

ವಲಯ–2 : ವಲಯ–1ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎನ್.ಆರ್. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಶನಿವಾರ, ಜೂನ್ ೪, ೨೦೧೧ (ಜ್ಯೇಷ್ಠ ೧೪, ಶಕ ವರ್ಷ ೧೯೩೩) | ನಂ. ೫೫೦ |
|---|---|---|


## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 115 ಜಿಪಸ 2011, ಬೆಂಗಳೂರು, ದಿನಾಂಕ: 04–06–2011.**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 72 ರೊಂದಿಗೆ ಓದಲಾದಂತೆ ಪ್ರಕರಣ 311 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ಕರ್ನಾಟಕ ಪಂಚಾಯತ್ ರಾಜ್ (ಒತ್ತುವರಿಗಳನ್ನು ತೆರವುಗೊಳಿಸುವ) ನಿಯಮಗಳು, 2011 ನ್ನು ಪ್ರಸ್ತಾಪಿಸಿ ಕರಡನ್ನು ಅಧಿಸೂಚನೆ ಸಂಖ್ಯೆ ಗ್ರಾಅಪ 115 ಜಿಪಸ 2011, ದಿನಾಂಕ: 28–04–2011 ರ ಮೂಲಕ ಕರ್ನಾಟಕ ರಾಜ್ಯಪತ್ರದ ವಿಶೇಷ ಪತ್ರಿಕೆಯ ಭಾಗ IV-A ಸಂಖ್ಯೆ: 450 ದಿನಾಂಕ: 28–04–2011 ರಲ್ಲಿ ಪ್ರಕಟಿಸಿದ್ದು, ಆ ಮೂಲಕ ಬಾಧಿತರಾಗುವ ಸಂಭವವಿರುವ ವ್ಯಕ್ತಿಗಳಿಂದ 15 ದಿನಗಳೊಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿರುವುದರಿಂದ:

ಮತ್ತು ದಿನಾಂಕ: 28–04–2011 ರ ವಿಶೇಷ ರಾಜ್ಯಪತ್ರವನ್ನು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ:

ಸದರಿ ಕರಡು ನಿಯಮದ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ಸಲಹೆಗಳು ಬಾರದಿರುವುದರಿಂದ:

ಈಗ 1993 ರ ಕರ್ನಾಟಕ ಪಂಚಾಯತ್ ರಾಜ್ (ಅಧಿನಿಯಮ ಸಂಖ್ಯೆ 14) 311 ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡಂತೆ ನಿಯಮಗಳನ್ನು ರಚಿಸುತ್ತದೆ.

### ನಿಯಮಗಳು

**(1) ಹೆಸರು ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು ಕರ್ನಾಟಕ ಪಂಚಾಯತ್ ರಾಜ್ (ಒತ್ತುವರಿಗಳನ್ನು ತೆರವುಗೊಳಿಸುವ) ನಿಯಮಗಳು, 2011 ಎಂದು ಕರೆಯತಕ್ಕದ್ದು;

(2) ಇದು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**(2) ಅರ್ಥ ವಿವರಣೆ.–** ಈ ನಿಯಮದಲ್ಲಿ ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ,

(ಅ) **''ಅಧಿನಿಯಮ''** ಎಂದರೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993 (1993 ರ ಕರ್ನಾಟಕ ಅಧಿನಿಯಮ ಸಂಖ್ಯೆ 14)

(ಆ) **"ಸಕ್ಷಮ ಪ್ರಾಧಿಕಾರ"** ಎಂದರೆ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಕ ಅಧಿಕಾರಿ ಅಥವಾ ಈ ನಿಯಮಗಳ ಉದ್ದೇಶಗಳಿಗಾಗಿ ಸರ್ಕಾರವು ಸಕ್ಷಮ ಪ್ರಾಧಿಕಾರವೆಂದು ಅಧಿಸೂಚಿಸಲ್ಪಟ್ಟ ಅಧಿಕಾರಿ.

(ಇ) **"ನಮೂನೆ"** ಎಂದರೆ ಈ ನಿಯಮಗಳಿಗೆ ಅನುಬಂಧಿಸಲಾದ ನಮೂನೆ

(ಈ) **''ಪ್ರಕರಣ''** ಎಂದರೆ ಅಧಿನಿಯಮದ ಪ್ರಕರಣ.

**(3) ಅಡೆತಡೆ ಮತ್ತು ಒತ್ತುವರಿಗಳನ್ನು ತೆಗೆದು ಹಾಕಲು ಅರ್ಜಿ.–**(1) ಯುಕ್ತವಾಗಿ ಅಧಿಕೃತನಾಗಿಲ್ಲದ ಯಾವುದೇ ವ್ಯಕ್ತಿಯು ಗ್ರಾಮ ಪಂಚಾಯಿತಿ/ಪೆರಂಬೋಕ್ ಭೂಮಿ, ಸಾರ್ವಜನಿಕ ಬೀದಿಗಳು, ಸ್ಥಳ, ಅನುಪಯುಕ್ತ ಭೂಮಿ, ಕಾಲುವೆಗಳು, ಕೆರೆಗಳು, ಆಟದ ಮೈದಾನ, ಉದ್ಯಾನವನಗಳು ಸಾರ್ವಜನಿಕರ ಉಪಯೋಗಕ್ಕಾಗಿ ಇರಿಸಿರುವ ಪ್ರದೇಶ, ಸ್ಮಶಾನ ಅಥವಾ ರುದ್ರಭೂಮಿ, ಖಾಸಗಿ ಸ್ವತ್ತಾಗಿಲ್ಲದ ಯಾವುದೇ ಬೀದಿ, ನಿವೇಶನ ಅಥವಾ ಸ್ಥಳಗಳಲ್ಲಿರುವ ಯಾವುದೇ ತೆರೆದ ಚರಂಡಿ, ಗಟಾರ, ಗ್ರಾಮಸಾರ ಚರಂಡಿ ಅಥವಾ ಮೇಲುಕಾಲುವೆ ಅಥವಾ ಅವುಗಳ ಹೊರಗೆ ಅಥವಾ ಮೇಲೆ ಅನಧಿಕೃತವಾಗಿ ಯಾವುದೇ ಒತ್ತುವರಿ ಅಥವಾ ಅಡೆತಡೆಗಳನ್ನು ಉಂಟು ಮಾಡಿದ್ದರೆ ಅಥವಾ ಉಂಟು ಮಾಡಲು ಮುಂದಾಗಿದ್ದರೆ ಮತ್ತು ಅಧಿನಿಯಮದ ಪ್ರಕರಣ 72 ರ ಉಪ ಪ್ರಕರಣ (1) ಮತ್ತು (2) ರಲ್ಲಿ ನಿರ್ದಿಷ್ಟಪಡಿಸಿದಂತೆ ಗೃಹಬಳಕೆಗಾಗಿ ಉಪಯೋಗಿಸುವ ಮರಳನ್ನು ಹೊರತುಪಡಿಸಿ ಮಣ್ಣು, ಮರಳು ಅಥವಾ ಇತರೆ ಸಾಮಗ್ರಿಗಳನ್ನು ತೆಗೆದು ಹಾಕಿದರೆ ಅಥವಾ ಅದರ ಮೇಲೆ ಯಾವುದೇ ಒತ್ತುವರಿಯನ್ನು ಮಾಡಿರುವುದು ಯಾವುದೇ ವ್ಯಕ್ತಿಗೆ ಕಂಡುಬಂದಲ್ಲಿ ಆತನು ವಿಷಯಾನುಗುಣವಾಗಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಾಧಿಕಾರಿ ಇವರಿಗೆ ಅಡೆತಡೆ ಮತ್ತು ಒತ್ತುವರಿಯ ನಿರ್ದಿಷ್ಟ ವಿವರಗಳೊಂದಿಗೆ ಅರ್ಜಿ ಸಲ್ಲಿಸತಕ್ಕದ್ದು.

(2) ಉಪ ನಿಯಮ (1) ರನ್ವಯ ಸ್ವೀಕರಿಸಿದ ಅರ್ಜಿಯನ್ನು ಸಂಬಂಧಿಸಿದ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಾಧಿಕಾರಿಯು ತನ್ನ ವರದಿ ಮತ್ತು ಅಗತ್ಯ ದಾಖಲೆಗಳೊಂದಿಗೆ ಅರ್ಜಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಆದಷ್ಟು ಶೀಘ್ರವಾಗಿ ಮತ್ತು ಅರ್ಜಿ ಸ್ವೀಕರಿಸಿದ 15 ದಿನಗಳೊಳಗಾಗಿ ರವಾನಿಸತಕ್ಕದ್ದು.

(3) ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಅಥವಾ ಗ್ರಾಮ ಲೆಕ್ಕಾಧಿಕಾರಿ ಇವರುಗಳಿಗೆ ಯುಕ್ತವಾಗಿ ಅಧಿಕೃತನಾಗಿಲ್ಲದ ಯಾವುದೇ ವ್ಯಕ್ತಿಯು ಗ್ರಾಮ ಪಂಚಾಯಿತಿ/ಪೆರಂಬೋಕ್ ಭೂಮಿ, ಸಾರ್ವಜನಿಕ ರಸ್ತೆ, ಸ್ಥಳ, ಅನುಪಯುಕ್ತ ಭೂಮಿ, ಕಾಲುವೆಗಳು, ಕೆರಗಳು, ಆಟದ ಮೈದಾನ, ಉದ್ಯಾನವನಗಳು ಸಾರ್ವಜನಿಕರ ಉಪಯೋಗಕ್ಕಾಗಿ ಇರಿಸಿರುವ ಪ್ರದೇಶ, ಸ್ಮಶಾನ ಅಥವಾ ರುದ್ರಭೂಮಿ, ಖಾಸಗಿ ಸ್ವತ್ತಾಗಿಲ್ಲದ ಯಾವುದೇ ಬೀದಿ, ನಿವೇಶನ ಅಥವಾ ಸ್ಥಳಗಳಲ್ಲಿರುವ ಯಾವುದೇ ತೆರೆದ ಚರಂಡಿ, ಗಟಾರ, ಗ್ರಾಮಸಾರ ಚರಂಡಿ ಅಥವಾ ಮೇಲುಕಾಲುವೆ ಅಥವಾ ಅವುಗಳ ಹೊರಗೆ ಅಥವಾ ಮೇಲೆ ಅನಧಿಕೃತವಾಗಿ ಯಾವುದೇ ಒತ್ತುವರಿ ಅಥವಾ ಅಡೆತಡೆಗಳನ್ನು ಉಂಟು ಮಾಡಿದ್ದರೆ ಅಥವಾ ಉಂಟು ಮಾಡಲು ಮುಂದಾಗಿದ್ದರೆ ಮತ್ತು

